


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 26-03-2021 ಪ್ರಶ್ನೆ ಸಂಖ್ಯೆ : 1917(2268)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕವಟಗಿಮಠ ಮಹಾಂತೇಶ್ ಮಲ್ಲಿಕಾರ್ಜುನ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 26-03-2021

ಉತ್ತರಿಸುವ ಸಚಿವರು: ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು

ವಿಷಯ : ರಾಜ್ಯದಲ್ಲಿ ವಿಶೇಷಚೇತನರಿಗೆ ನೀಡಲಾಗುವ ಮಾಸಾಶನದಲ್ಲಿ ತಾರತಮ್ಯವಾಗಿರುವ ಬಗ್ಗೆ

(ಅ) ಅಂಗವಿಕಲತೆಯ ಪ್ರಮಾಣವನ್ನಾಧರಿಸಿ ರಾಜ್ಯದಲ್ಲಿ ವಿಶೇಷಚೇತನರಿಗೆ ನೀಡುತ್ತಿರುವ ಮಾಸಾಶನದಲ್ಲಿ ತಾರತಮ್ಯ ಎಸಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಬಂದಿದ್ದಲ್ಲಿ, ತಾರತಮ್ಯ ಸರಿಪಡಿಸಿ ಎಲ್ಲಾ ವಿಶೇಷಚೇತನರಿಗೂ ಏಕರೂಪ ಮಾಸಾಶನ ನೀಡುವ ಯೋಜನೆ ಸರ್ಕಾರದ ಮುಂದಿದೆಯೇ;

(ಇ) ಇತರೆ ರಾಜ್ಯಗಳಿಗೆ ಹೋಲಿಸಿದಲ್ಲಿ ರಾಜ್ಯದಲ್ಲಿ ಕಡಿಮೆ ಇರುವ ಸದರಿ ಮಾಸಾಶನವನ್ನು ಹೆಚ್ಚಿಸಲು ಸರ್ಕಾರ ಯೋಜನೆ ರೂಪಿಸಿದೆಯೇ;

(ಈ) ರಾಜ್ಯದಲ್ಲಿ ಇರುವ ಎಲ್ಲಾ ಬಗೆಯ ವಿಕಲಚೇತನರ ಒಟ್ಟು ಸಂಖ್ಯೆ ಎಷ್ಟು; ಮತ್ತು ವಾರ್ಷಿಕ ಮಾಸಾಶನದ ಮೊತ್ತ ಎಷ್ಟು; (ವಿವರ ನೀಡುವುದು)

(ಉ) ಬೆಳಗಾವಿ ಜಿಲ್ಲೆಯಲ್ಲಿರುವ ಎಲ್ಲಾ ಬಗೆಯ ವಿಕಲಚೇತನರ ಸಂಖ್ಯಾ ವಿವರ ಹಾಗೂ ವಾರ್ಷಿಕ ಮಾಸಾಶನದ ವಿವರ ನೀಡುವುದು?